

# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ಎನ್ಎಸ್ — ೧೯

ಸಂಪುಟ ೧ ಸಂಚಿಕೆ ೩೩ ಕೊಪ್ಪ ೧-೫-೮೩ ಭಾನುವಾರ ಬೆಲೆ ೨೦ ಪೈಸೆ


## ನ್ಯಾಯಾಲಯವೆಂಬ ಮರೀಚಿಕೆ!

**ಕೊಪ್ಪ: ಇಷ್ಟೊತ್ತಿಗಾಗಲೇ ಎಂದೋ ಪ್ರಾರಂಭವಾಗಬೇಕಿದ್ದ ಪ್ರಥಮ ದರ್ಜೆ ನ್ಯಾಯಾಲಯ ತಾಲೂಕಿನ ಜನರ "ಕೈಗೆ" ಸಿಗದೆ, ಮರಳುಗಾಡಿನ ಮರೀಚಿಕೆಯಂತೆ ಮುಂದೆ ಮುಂದೆ ಹೋಗುತ್ತಿದೆ.**

ಸುಮಾರು ೧೦ ವರ್ಷದ ಹಿಂದೇ ಕೊಪ್ಪಕ್ಕೆ ನ್ಯಾಯಾಲಯ ಮಂಜೂರಾಗಿ, ೬ ವರ್ಷದ ಹಿಂದೆ ಕಟ್ಟಡವೂ ನಿರ್ಮಾಣವಾದರೂ (ಅದಕ್ಕೂ ಅಡ್ಡಿಗಳೇ) ಪ್ರಾರಂಭದಿಂದಲೂ ನರಸಿಂಹರಾಜಪುರದವರ ವಿರೋಧದಿಂದಾಗಿ ಕೋರ್ಟು ಆರಂಭವಾಗಲಿಲ್ಲ. ಕಳೆದವರ್ಷ, ಎಲ್ಲಾ ತಾ|| ಕೇಂದ್ರಗಳಲ್ಲೂ ಪ್ರಥಮದರ್ಜೆ ನ್ಯಾಯಾಲಯ ತೆರೆಯುವ ನಿರ್ಧಾರವನ್ನು ಸರ್ಕಾರವೇ ತೆಗೆದುಕೊಂಡಾಗ ಇನ್ನಾದರೂ ಬಹಳ ಕಾಲದ ನಿರೀಕ್ಷೆ ಈಡೇರೀತು ಎನಿಸಿತ್ತು. ಆದರೆ ಆ ನಿರ್ಧಾರವೂ ಸರ್ಕಾರದ ಇತರ ನಿರ್ಧಾರಗಳಂತೆಯೇ ಕಾಗದದ ಮೇಲೆ ಮಾತ್ರ ಉಳಿದಾಗ ಕೊಪ್ಪ ಪುರಸಭೆ, ತಾ.ಅ.ಮಂಡಳಿ ಮತ್ತು ತಾಲ್ಲೂಕಿನ ಎಲ್ಲಾ ೨೭ ಪಂಚಾಯ್ತಿಗಳೂ ಕೂಡಲೇ ನ್ಯಾಯಾಲಯ ತೆರೆಯುವಂತೆ ಸರ್ಕಾರವನ್ನು ಒತ್ತಾಯಿಸಿ ನಿರ್ಣಯ ಮಾಡಿದವು. ಅವುಗಳ ಮುಖಂಡರ ನಿಯೋಗ ಸಂಬಂಧಪಟ್ಟ ಮಂತ್ರಿಗಳು, ಮುಖ್ಯ ನ್ಯಾಯಾಧೀಶರು ಮುಂತಾದವರನ್ನು ಭೇಟಿಮಾಡಿ ಕೋರ್ಟಿನ ಅವಶ್ಯಕತೆ ವಿವರಿಸಿತು.

### ಮುಂದುವರಿದ ಅಡ್ಡಿ

ಕಳೆದ ತಿಂಗಳು ಮೂಡಿಗೆರೆಯಲ್ಲಿ ನ್ಯಾಯಾಲಯ ಆರಂಭೋತ್ಸವಕ್ಕೆ ಬಂದಿದ್ದ ಕಾನೂನುಮಂತ್ರಿಗಳು, ಶ್ರೇಷ್ಠ ನ್ಯಾಯಾಧೀಶರು, ಮುಂತಾದವರನ್ನು ಕೊಪ್ಪದ ನಿಯೋಗ ಭೇಟಿಮಾಡಿದ್ದಾಗ ನ್ಯಾಯಾಲಯ ತೆರೆಯಲು ಇಷ್ಟರಲ್ಲೇ ಆಜ್ಞೆ ಹೊರಡಿಸಲಿರುವುದಾಗಿ ಭರವಸೆ ಕೊಡಲಾಗಿತ್ತು.

ಇದರಿಂದ ನ.ರಾ.ಪುರದ ಕೋರ್ಟೇನೂ ರದ್ದಾಗುವುದಿಲ್ಲ; ಅಲ್ಲಿನ ಜನರಿಗೇನೂ ತೊಂದರೆಯಾಗುವುದಿಲ್ಲ ಎಂದು ಗೊತ್ತಿದ್ದರೂ ಅಲ್ಲಿನ ಕೆಲವರ ವಿರೋಧ ಮುಂದುವರಿದೇ ಇದೆ. ಅತಿ ಚಿಕ್ಕ ತಾಲ್ಲೂಕಾದ ಶೃಂಗೇರಿಯಲ್ಲಿ ಕೋರ್ಟು ತೆರೆಯುವ ನಿರೀಕ್ಷೆ ಸದ್ಯಕ್ಕಿಲ್ಲದಿರುವುದರಿಂದ ಆ ಜನರಿಗೂ ಕೊಪ್ಪದ ಕೋರ್ಟು ವರವಾಗಲಿದೆ. ಇಷ್ಟಿದ್ದರೂ ಈ ಎರಡು ತಾ||ಗಳ 'ನ್ಯಾಯ ದಾಹಿ'ಗಳಿಗೆ ಈ ಬಿಸಿಲುಗುದುರೆ ಕೈಗೆ ಸಿಕ್ಕಿದಂತೆಲ್ಲಾ ಇನ್ನೂ ಮುಂದೆ ಮುಂದೆಯೇ ಓಡುತ್ತಿದೆ.

### ಸಾರ್ವಜನಿಕ ದೂರವಾಣಿ ಕಚೇರಿ ಆರಂಭ

(ನಮ್ಮ ಪ್ರತಿನಿಧಿಯಿಂದ)

ಉತ್ತಮೇಶ್ವರ: ಇಲ್ಲಿಗೆ ಸಮೀಪದ ದಯಂಬಳ್ಳಿ ಅಂಚೆಕಚೇರಿಯಲ್ಲಿ ಸಾರ್ವಜನಿಕ ದೂರವಾಣಿ (ಪಿಸಿಓ) ಸೌಲಭ್ಯವನ್ನು ದೂರವಾಣಿ ಉಪವಿಭಾಗಾಧಿಕಾರಿ ಕೃಷ್ಣಮೂರ್ತಿಯವರು ಏ. ೨೬ ರಂದು ಉದ್ಘಾಟಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಅಗಳಗಂಡಿ ಪಂ. ಅಧ್ಯಕ್ಷ ಹೆಚ್. ಟಿ. ರಾಮಪ್ಪಗೌಡ ವಹಿಸಿದ್ದರು. ಸರ್ಕಾರ ಒದಗಿಸಿರುವ ಈ ಸೌಲಭ್ಯವನ್ನು ಸದುಪಯೋಗಪಡಿಸಿಕೊಳ್ಳಲು ಗ್ರಾಮದ ಯುವ ಮುಂದಾಳು ವೈ. ಎಂ. ಸುರೇಂದ್ರ ಕರೆಕೊಟ್ಟರು.

ಕಳೆದ ವರ್ಷ ದಯಂಬಳ್ಳಿಗೆ ಅಂಚೆಕಚೇರಿ ಪಡೆಯಲು ಇಲಾಖೆಯೊಂದಿಗೆ ಮುತುವರ್ಜಿಯಿಂದ ವ್ಯವಹರಿಸಿದ ಊರಿನ ಯುವಕರು ಕೇವಲ ಒಂದೇ ವರ್ಷದಲ್ಲಿ ದೂರವಾಣಿ ಸೌಲಭ್ಯವನ್ನೂ ಸಹ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ.



### ಗ್ರಾಮಲೆಕ್ಕಿಗರಿಗೆ ಹೊಡೆತ

ಕೊಪ್ಪ: ಇಲ್ಲಿನ ಬಿಂತ್ರವಳ್ಳಿ ಪಂಚಾಯ್ತಿಯ ಗ್ರಾಮಲೆಕ್ಕಿಗ ನಾರಾಯಣನಾಯಕ್ ಎಂಬವರಿಗೆ ಹೊಡೆದ ಆಪಾದನೆಯ ಮೇಲೆ ನಾರಾಯಣ ಶೆಟ್ಟಿ ಮತ್ತು ಯೋಗೇಂದ್ರಶೆಟ್ಟಿ ಎಂಬವರ ಮೇಲೆ ಪೋಲೀಸರು ಮೊಕದ್ದಮೆ ಹೂಡಿದ್ದಾರೆ.

ಬಿಂತ್ರವಳ್ಳಿ ಪಂಚಾಯ್ತಿ ಕಚೇರಿಗೆ ಸೇರಿರುವ ಕ್ಯಾಂಟೀನನ್ನು ಮೂಲ ಬಿಡ್ಡುದಾರ ಇಬ್ರಾಹಿಂ ಎಂಬವರಿಂದ ಗುತ್ತಿಗೆಯ ಮೇಲೆ ಆಪಾದಿತರು ನಡೆಸುತ್ತಿದ್ದು, ಅದನ್ನು ಬಿಡಿಸಿಕೊಡಬೇಕೆಂದು ಇಬ್ರಾಹಿಂ ಕೋರಿದ್ದರ ಮೇರೆಗೆ ನೋಟೀಸು ಜಾರಿ ಮಾಡಿದ್ದೇ ಗ್ರಾಮಲೆಕ್ಕಿಗರ ಮೇಲೆ ಹಲ್ಲೆಗೆ ಕಾರಣ ಎನ್ನಲಾಗಿದೆ.

ಏ. ೨೦ರಂದು ಪ್ರಕರಣ ನಡೆದಿದ್ದು, ಆಪಾದಿತರನ್ನು ಬಂಧಿಸಿ ೨೫ರಂದು ನ.ರಾ. ಪುರ ಕೋರ್ಟಿನಲ್ಲಿ ಹಾಜರ್ಪಡಿಸಲಾಗಿ ಅವರನ್ನು ಜಾಮೀನಿನ ಮೇಲೆ ಬಿಡಲಾಗಿದೆ.

### ಅಭಿನವ ರೈತ ಸಂಘದ ರಜತ ಮಹೋತ್ಸವ

ಅಂದಗಾರು: ತನ್ನ ಬಹುಮುಖ ಚಟುವಟಿಕೆಗಳಿಂದ ಈ ಭಾಗದಲ್ಲಿ ಒಳ್ಳೆಯ ಹೆಸರು ಗಳಿಸಿರುವ ಇಲ್ಲಿನ ಅಭಿನವ ರೈತಸಂಘ ಏ. ೨೩ ಮತ್ತು ೨೪ರಂದು ತನ್ನ ೨೫ನೇ ಹುಟ್ಟುಹಬ್ಬವನ್ನು ಆಚರಿಸಿತು. ಸಮಾರಂಭವನ್ನು ತೀರ್ಥಮುತ್ತೂರು ಮಠಾಧೀಶರ ಅಧ್ಯಕ್ಷತೆಯಲ್ಲಿ ಪಿ.ಜಿ. ಗುರ್ಜರ್ ಉದ್ಘಾಟಿಸಿದರು. ಸಂಜೆ ಕೋಟದ 'ಯಕ್ಷತರಂಗ'ವೆ ಬಾಲಕರಿಂದ ಯಕ್ಷಗಾನ ನಡೆಯಿತು.

ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಬಿ.ಜಿ. ಚಿದಂಬರ್ ವಹಿಸಿದ್ದು ತಹಸೀಲ್ದಾರ್ ಹೆಚ್.ಎಂ. ನಾಗಪ್ಪ ಸಮಾರೋಪ ಭಾಷಣ ಮಾಡಿದರು. ಸ್ಥಳೀಯ ಕಲಾವಿದರಿಂದ ಸಂಗೀತ ಸಂಜೆ ಕಾರ್ಯಕ್ರಮ ನಡೆಯಿತು.

### ವಾರ್ಷಿಕೋತ್ಸವ ಮತ್ತು ರಂಗಮಂದಿರ ಉದ್ಘಾಟನೆ

ಹುಲಿಗರಡಿ: ಇಲ್ಲಿಯ ತರುಣ ರೈತ ಸಂಘ ಮತ್ತು ಪ್ರಗತಿ ಮಹಿಳಾ ಸಮಾಜಗಳ ವಾರ್ಷಿಕೋತ್ಸವ ಹಾಗೂ ರಂಗಮಂದಿರ ಉದ್ಘಾಟನೆ ಏ. ೨೫ರಂದು ಬಿ. ಜಿ. ಚಿದಂಬರ್ ಅಧ್ಯಕ್ಷತೆಯಲ್ಲಿ ನಡೆಯಿತು. ಕೆ. ಸಾಂಬಶಿವನ್ ರಂಗಮಂದಿರ ಉದ್ಘಾಟಿಸಿದರು. ಕೊಪ್ಪ ತಾ.ಅ.ಮಂ. ಸದಸ್ಯರುಗಳಾದ ಎ. ರಾಮಚಂದ್ರರಾವ್ ಮತ್ತು ಜೆ.ಸಿ. ಸುಬ್ಬಾರಾವ್ ಹಾಗೂ ತಾ|| ರೈತ ಸಂಘದ ಅಧ್ಯಕ್ಷ ಮಳಿಗೆ ಚಂದ್ರಶೇಖರ ಸಮಾರಂಭದಲ್ಲಿ ಹಾಜರಿದ್ದರು. ಸಂಘದ ಸದಸ್ಯರಾದ ಪ್ರತಿಭಾವಂತ ಯುವ ಕಲಾವಿದ ಬಲಿಗೋಡು ನಾಗೇಶ್‌ರವರನ್ನು ಅಗಳಗಂಡಿ ಪಂಚಾಯ್ತಿ ಅಧ್ಯಕ್ಷ ಹೆಚ್.ಟಿ. ರಾಮಪ್ಪಗೌಡ ಹಾರಹಾಕಿ ಸನ್ಮಾನಿಸಿದರು.

ಬಲಿಗೋಡು ನಾಗೇಶ್ ಸ್ವಾಗತಿಸಿ, ಹೆಚ್. ಎಂ. ಶಿವಶಂಕರ್ ವಂದಿಸಿದರು.

ಅಂಗನವಾಡಿಯ ಶಿಶುವಿಹಾರದ ಮಕ್ಕಳು ಮತ್ತು ಸಂಘಗಳ ಸದಸ್ಯ-ಸದಸ್ಯೆಯರಿಂದ ಮನರಂಜನೆ ಮತ್ತು ನಾಟಕಗಳು ನಡೆದವು. (ವರದಿ: ಕಲಬಿ ಶ್ರೀನಿವಾಸ್)

## ಕೈಕೊಟ್ಟ ಹಿಂಗಾರು- ಗಾರಿಹೋದ ಕಾರುಗದ್ದೆ ಪೈರು

ಫೆಬ್ರವರಿ-ಮಾರ್ಚ್ ನಡುವೆ ಬೀಳಬೇಕಾಗಿದ್ದ ಹಿಂಗಾರು ಮಳೆ ಈ ಬಾರಿ ನಾಪತ್ತೆಯಾಗಿದ್ದು, ಈ ಮಳೆಯನ್ನು ನಂಬಿದ್ದ ನೂರಾರು ಎಕರೆ ಕಾರುಗದ್ದೆ ಬೆಳೆ ನಾರಿಹೋಗಿರುವ, ಹೋಗುತ್ತಿರುವ ವರದಿಗಳು ತೀರ್ಥಳ್ಳಿ, ಶೃಂಗೇರಿ, ಕೊಪ್ಪ, ನ.ರಾ.ಪುರ ತಾ||ಗಳ ಎಲ್ಲೆಡೆಗಳಿಂದ ಬರುತ್ತಿವೆ.

**ಹಳ್ಳಗಳನ್ನೋ, ಸಲ್ಲುಗಳನ್ನೋ ಆಧರಿಸಿದ್ದ ಗದ್ದೆಗಳೂ ಸಹ, ಅವುಗಳಲ್ಲಿನ ನೀರು ಪೂರ್ತಿ ಬತ್ತಿದ್ದರಿಂದಾಗಿ ಸುಟ್ಟುಹೋಗಿರುವ ದೃಶ್ಯ ಎಲ್ಲಿಹೋದರೂ ಎದುರಾಗುತ್ತಿದೆ.**

### ಅಪರೂಪವಾಗುತ್ತಿರುವ ಹಿಂಗಾರು

ಮಲೆನಾಡಿನ ಈ ಭಾಗದಲ್ಲಿ ಈಚಿನ ವರ್ಷಗಳಲ್ಲಿ ಹಿಂಗಾರು ಸರಿಯಾಗಿ ಆದದ್ದೇ ಅಪರೂಪ. ಆದರೂ, ಕನಿಷ್ಠ ೨-೩ ಮಳೆಯಾದರೂ ಆಗಿ ಗದ್ದೆ-ತೋಟಗಳಿಗೆ ಒಂದು ಹದ, ಹಳ್ಳ—ಸಲ್ಲುಗಳ ನೀರು ಪೂರ್ತಿ ಬತ್ತದಂತೆ ಆಸರೆ-ಇಷ್ಟಾದರೂ ಆಗುತ್ತಿತ್ತು. ಕಳೆದ ವರ್ಷ ಇದೂ ನಾಮಕಾವಾಸ್ತೆಯಾಗಿ, ಎಷ್ಟೋ ಕಡೆ ಗದ್ದೆಗಳು ಒಣಗಿದ್ದವು. ಆದರೆ ಈ ವರ್ಷ ಮಾತ್ರ ಹಿಂದೆಂದೂ ಆರದಿದ್ದ ಹಳ್ಳಗಳು ಆರಿವೆ. ಹಿಂದೆಂದೂ ಗಾರದಿದ್ದ ಗದ್ದೆಗಳು ಗಾರಿವೆ. ವಾತಾವರಣಕ್ಕೆ ಕುಸಿದ ಅಡಿಕೆ ಧಾರಣೆಯಿಂದ ಮೊದಲೇ ಕಂಗೆಟ್ಟಿದ್ದ ಸಣ್ಣ-ಮಧ್ಯಮ ರೈತರಿಗೆ ಇದರಿಂದಾಗಿ ವಿಕಲಾರದವನಿಗೆ ಮತ್ತೊಂದು ಏಟು ಹಾಕಿದಂತಾಗಿದೆ. ಅಲ್ಪಸ್ವಲ್ಪ ಗದ್ದೆಯಿಂದ ಅನ್ನ್ಯ ಕಾಲ, ಕೂಲಿಯಿಂದ ಇನ್ನಷ್ಟು ಕಾಲ, ಅಥವಾ ಪೂರ್ತಿ ಕೂಲಿಯಿಂದಲೇ ಜೀವನ ತೆಗೆಯುತ್ತಿದ್ದ ಬಡವರ ಪಾಡಂತೂ ತೀರ ಶೋಚನೀಯವಾಗಿದೆ.

### ಕಟ್ಟಿನಮನೆಯಲ್ಲಿ ಇನ್ನೊಂದು ಹಸು ಹುಲಿಗೆ ಬಲಿ

(ವರದಿ: ಹುಲಿಕೆರೆ ಮಂಜುನಾಥ್)

ಕಟ್ಟಿನಮನೆ : ಏ. ೨೫ರಂದು ಇಡಿಕೆ ತೋಟವೊಂದರಲ್ಲಿ ಅಣ್ಣಯ್ಯ ಎಂಬವರ ದನವನ್ನು ಹಿಡಿದಿರುವ ಹುಲಿ ಬಾರಿ ಬೋಗಿಗೆ ಸುಗ್ಗುವ ಮುನ್ಸೂಚನೆ ಕೊಟ್ಟಿದೆ. ಸುಮಾರು ತಿಂಗಳಿಂದ ಜಾನುವಾರು ಕಳೆದುಕೊಂಡವರು ಬಹಳಿಗೆ ಮಾತ್ರ, ಹುಲಿಯ ಕಾಟದಿಂದ ತತ್ತರಿಸುವ ಅರಣ್ಯ ಇಲಾಖೆ ಬಡತನ ಬಿಟ್ಟು ಕೂಡಲೇ ಹುಲಿ ಹಾವಳಿ ತಪ್ಪಿಸಲು ವ್ಯವಸ್ಥೆ ಮಾಡಬೇಕಾಗಿದೆ.



### ದ. ಸಂ. ಸ. ಆಶ್ರಯದಲ್ಲಿ ಶೃಂಗೇರಿ, ಕೊಪ್ಪದಲ್ಲಿ ಅಂಬೇಡ್ಕರ್ ಜಯಂತಿ ಆಚರಣೆ

ಕೊಪ್ಪ: ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಶೃಂಗೇರಿ ಮತ್ತು ಕೊಪ್ಪ ಶಾಖೆಗಳ ಆಶ್ರಯದಲ್ಲಿ ಏ. ೨೩ ಮತ್ತು ೨೪ರಂದು ಈ ಸ್ಥಳಗಳಲ್ಲಿ ಅಂಬೇಡ್ಕರರ ೯೨ನೇ ಜನ್ಮ ದಿನ ಆಚರಿಸಲಾಯಿತು.

ಈ ಸಂದರ್ಭದಲ್ಲಿ ಮಾತನಾಡಿ, ಅಂಬೇಡ್ಕರರ ಜೀವನ ಮತ್ತು ವಿಚಾರಧಾರೆಗಳ ಪರಿಚಯ ಮಾಡಿಕೊಟ್ಟ ದ.ಸಂ.ಸ ರಾಜ್ಯ ಸಂಚಾಲಕ ಎಂ.ಡಿ. ಗಂಗಯ್ಯ, ರಾಧಾಕೃಷ್ಣ, ಕೆ.ಎಂ.ಗೋಪಾಲ್ ಮುಂತಾದವರು ಅಂಬೇಡ್ಕರರ ಜೀವನದ ಸ್ಫೂರ್ತಿಯಿಂದ ಸ್ವಾಭಿಮಾನಿಗಳಾಗಿ ಅನ್ಯಾಯ, ಅಸಮಾನತೆಗಳ ಈ ಸಮಾಜವನ್ನು ಬದಲಿಸಲು ದಲಿತರಿಗೆ ಕರೆಕೊಟ್ಟರು.


'ಮುಂಜಾವು'

ಚಂದಾದರ: ವಾರ್ಷಿಕ ಚಂದಾ ೧೦ರೂ.

## ಸ್ಟೈಪೆಂಡಿಯರಿಗಳ ವೇತನ ಏರಿಕೆ ಬಗ್ಗೆ ಶೀಘ್ರ ನಿರ್ಧಾರದ ಭರವಸೆ

ಬೆಂಗಳೂರು: ಸ್ಟೈಪೆಂಡಿಯರಿ ಪದವೀಧರರ ವೇತನ ಹೆಚ್ಚಿಸುವ ಬಗ್ಗೆ ಇಷ್ಟರಲ್ಲೇ ತೀರ್ಮಾನ ತೆಗೆದುಕೊಳ್ಳಲಾಗುವುದೆಂದೂ, ಅವರನ್ನು ಆದಷ್ಟು ಬೇಗ ಖಾಯಂಗೊಳಿಸಲು ಕ್ರಮ ಕೈಗೊಳ್ಳಲಾಗುವುದೆಂದೂ ಮುಖ್ಯಮಂತ್ರಿಗಳು ಭರವಸೆ ಕೊಟ್ಟಿರುವುದಾಗಿ ವರದಿಯಾಗಿದೆ.

ವಯೋಮಿತಿ ರಿಯಾಯ್ತಿ ನಂತರವೂ ವಯಸ್ಸು ಮೀರಿದವರಿಗೆ ಸ್ವಯಂ ಉದ್ಯೋಗಾವಕಾಶ ಹಾಗೂ ಕಾರ್ಪೊರೇಶನ್, ಮಂಡಳಿ ಮುಂತಾದೆಡೆ ಉದ್ಯೋಗ ಒದಗಿಸಲು ಕ್ರಮ ಕೈಗೊಳ್ಳುವ ಭರವಸೆ ನೀಡಿದ್ದಾರೆಂದೂ ವರದಿಯಾಗಿದೆ.

## ಯಾತ್ರೆ ಹೋದಾಗ ನಾಲೆಯಲ್ಲಿ ಮುಳುಗಿ ಸಾವು

ಕಟ್ಟೆನಮನೆ: ಕೊಪ್ಪದಿಂದ ಮಂತ್ರಾಲಯಕ್ಕೆ ಯಾತ್ರೆಹೋಗಿದ್ದ ತಂಡದಲ್ಲಿದ್ದ ಇಲ್ಲಿನ ಪಂಚಾಯ್ತಿ ಕಾರ್ಯದರ್ಶಿ ನಾರಾಯಣಮೂರ್ತಿ ಎಂಬವರು ಹಂಪೆಯ ಬಳಿ ತುಂಗಭದ್ರಾ ನಾಲೆಯಲ್ಲಿ ಮುಳುಗಿ ಸಾವನ್ನಪ್ಪಿರುವುದಾಗಿ ತಿಳಿದುಬಂದಿದೆ. ಇವರಿಗೆ ಹೆಂಡತಿ, ೪ ಮಕ್ಕಳು ಹಾಗೂ ವಯಸ್ಸಾದ ತಾಯಿ ಇದ್ದಾರೆಂದೂ ಗೊತ್ತಾಗಿದೆ.

## ಗ್ರಾಮಾಂತರ ನೀರ ಪೂರೈಕೆ ಯೋಜನೆಗಳು

ಕೊಪ್ಪ: ಈ ವರ್ಷದ ರಾಜ್ಯ ಬಜೆಟ್‌ನಲ್ಲಿ ಸೇರ್ಪಡೆಯಾಗಿರುವ ಕ್ಷೇತ್ರದ ಗ್ರಾಮಾಂತರ ನೀರು ಪೂರೈಕೆ ಯೋಜನೆಗಳು ಇವು: ಜಯಪುರ (ಗ್ರಾಮಾಂತರ), ಕೊಗ್ರೆ, ಗುಣವಂತೆ ಬಡಾವಣೆ, ಕಮ್ಮರಡಿ, ಬಿಳಲುಕೊಪ್ಪ, ಎಲೆಮಡಲು, ಗಡಿಕಲ್ಲು (ಕೊಪ್ಪ ತಾ॥), ವೈಕುಂಠಪುರ*, ಅಡ್ಡಗದ್ದೆ, ಕಿಗ್ಗ, ನೆಮ್ಮಾರು, ವಿದ್ಯಾರಣ್ಯಪುರ* (ಶೃಂಗೇರಿ ತಾ॥); ಬಾಳೆಹೊನ್ನೂರು*, ಮಾಗುಂಡಿ*, ಮುತ್ತಿನಕೊಪ್ಪ, ಬನ್ನೂರು, ಕಡ್ಲೆಮಕ್ಕಿ, ಮಡಬೂರು, ಕಡೇಮನೆ, ಹರಾವರಿ, ಮೇಲ್ಪಾಲ್ (ನ.ರಾ ಪುರ ತಾ॥) [* ಈ ಗುರ್ತಿನವು ಬೇಗಾನೆ ರಾಮಯ್ಯನವರ ಕಾಲದಲ್ಲಿ ಕೆಲಸ ಶುರುವಾಗಿ ಈಗ ವಿವಿಧ ಹಂತದಲ್ಲಿರುವಂಥವು ಎಂದು ಶಾಸಕರ ಕಛೇರಿಯಿಂದ ತಿಳಿದು ಬಂದಿದೆ.]

## ತಾ॥ಬ್ರಾಹ್ಮಣ ಮಹಾಸಭೆಯ ೨ನೇ ವಾರ್ಷಿಕ ಸಮ್ಮೇಳನ

ಕೊಪ್ಪ: ತಾಲ್ಲೂಕು ಬ್ರಾಹ್ಮಣಮಹಾಸಭೆಯ ೨ನೇ ವಾರ್ಷಿಕ ಸರ್ವಸದಸ್ಯ ಸಭೆ ಮೇ ೨ರಂದು ಮಧ್ಯಾಹ್ನ ಪಿ.ಜಿ. ಗುರ್ಜರ್‌ರವರ ಅಧ್ಯಕ್ಷತೆಯಲ್ಲಿ ಹರಿಹರಪುರ ಮಠದಲ್ಲಿ ನಡೆಯುತ್ತದೆ.

## ಗೋವಿಂದ ಗೌಡರ ಕಾಲದಲ್ಲೇ....

ಮೇಲುಬೆಳ್ರೆ: ಹರಿಹರಪುರದಿಂದ ಮೇಲುಬೆಳ್ರೆ ಮಾರ್ಗವಾಗಿ ಬಿಲುಗದ್ದೆಗೆ ಹೋಗುವ ಸುಮಾರು ೭ ಕಿ.ಮೀ. ದೂರ ರಸ್ತೆ ತುಂಬ ದುಃಸ್ಥಿತಿಯಲ್ಲಿದೆ. ರಸ್ತೆಯು ಬದಿ ಅಲ್ಲಲ್ಲಿ ಒಂದೆರಡು ಒಳ್ಳೆ ಜಾತಿ ಜಲ್ಲಿ ನೋಡಿ, "ಇಲ್ಲಿಗೆ ಜಲ್ಲಿ ಹೇಗೆ ಬಂತು?" ಎಂದು ವಿಚಾರಿಸಿದಾಗ ಈ ರಸ್ತೆಗೆ ಜಲ್ಲಿ ಆಗಿತ್ತು ಎಂದು ತಿಳಿಯಿತು. ಮೇಲುಬೆಳ್ರೆಯಿಂದ ಮುಂದೆ ಎರಡುಕಡೆ ವರ್ಷವರ್ಷವೂ ಧರೆ ಕುಸಿದು ೧೦೦ ಅಡಿಗೂ ಹೆಚ್ಚು ಆಳದ ಭಾರಿ ಕಮರಿ ಬಿದ್ದಿದೆ, ರಸ್ತೆ ಅರ್ಧಕ್ಕಿಂತ ಹೆಚ್ಚು ಕೊರೆದಿದೆ. ಇಲ್ಲಿ ಮಕ್ಕಳು, ದನಕರುಗಳು ಕೆಳಗೆ ಬೀಳದಂತೆ ಎಂಥ ರಕ್ಷಣೆಯೂ ಇಲ್ಲ. ಈ ಬಗ್ಗೆ ಸಂಬಂಧಪಟ್ಟವರು ತುರ್ತು ಗಮನ ಕೊಡಬೇಕಾಗಿದೆ.

ಹಿಂದೆ ಗೋವಿಂದಗೌಡರು ತಾ. ಅ. ಮಂ. ಅಧ್ಯಕ್ಷರಾಗಿದ್ದಾಗ (ಸುಮಾರು ೧೫ ವರ್ಷದ ಹಿಂದೆ) ಇಲ್ಲೊಂದು ಕಾಲು ಸೇತುವೆ ಆಗಿ, ನಂತರ ರಸ್ತೆ ಬಹುಪಾಲು ಕಡಿಯಾಗಿತ್ತು. "ಅನಂತರ ದೊಡ್ಡದೊಡ್ಡವರು ಬಂದು ದೊಡ್ಡದೊಡ್ಡ ಭಾಷಣ ಮಾಡಿದರೂ ಬೆಡಾವಣೆ ಬಾಯಲ್ಲಿ ಮಾತ್ರ...." ಎಂದು ಊರವರ ಆಕ್ರೋಶ. ಈಗ ಗೌಡರು ಶಾಸಕರಾಗಿ ಬಂದನಂತರ ಈ ರಸ್ತೆ ಲೋಕೋಪಯೋಗಿ ಇಲಾಖೆಗೆ ಸೇರಿತಂತೆ. "ಇನ್ನಾದರೂ ರಸ್ತೆ ಸ್ವಲ್ಪ ಸುಧಾರಿಸುತ್ತಾ ನೋಡಬೇಕು" ಎನ್ನುತ್ತಾ ಊರವರು "ಇದರ ನಂತರ ಆದ ಎಲ್ಲಾ ರಸ್ತೆಗಳು ಟಾರು ಕಂಡಾಯಿತು. ಇದೇ ಬಿಲುಗದ್ದೆ ಮೂಲಕ ಹೋಗುವ ಕಾವಡಿ-ಕಾರು ವಳ್ಳಿ ರಸ್ತೆಗೆ ಬೇಗಾನೆಯವರಿಗೆ ಟಾರು ಆಗಿದೆ. ಈ ರಸ್ತೆಗೆ ಮತ್ತೊಂದು ಹಿಡಿ ಜಲ್ಲಿ ಕೂಡ ಬೀಳಲಿಲ್ಲ...." ಎನ್ನುತ್ತಾರೆ.

ಲಂಚದ ಹೊಲಸನ್ನೇ ತಿಂದು ಬದುಕುತ್ತಿರುವ ಇಂದಿನ ನೌಕರ ವರ್ಗ ಹಾಗೂ ಅತೀ ಸಮಯಸಾಧಕತನಕ್ಕಿಳಿದಿರುವ ಬೆಂಬಲಿಗರು-ಕಾರ್ಯಕರ್ತರನ್ನು ಕಟ್ಟಿಕೊಂಡು ಗೋವಿಂದಗೌಡರು ತಮ್ಮ ಹಿಂದಿನ ಆ ಜನಮೆಚ್ಚಿಗೆಯನ್ನು ಪುನಃ ಪಡೆದಾರೇ ಎಂದು ಅನುಮಾನವಾಗುತ್ತದೆ.

## "ರಸ್ತೆ ಡುಬ್ಬಕ್ಕೆ ಬೋರ್ಡು ಹಾಕಿಸಿ"

ಕುಮರಿಗುಂಡಿ: ಇಲ್ಲಿನ ಮುಖ್ಯರಸ್ತೆಯಲ್ಲಿ ಎರಡು ಕಡೆ ರಸ್ತೆ ಡುಬ್ಬ ನಿರ್ಮಿಸಲಾಗಿದೆ. ಆದರೆ ಅವುಗಳ ಆಕಡೆ, ಈಕಡೆ ಈ ಬಗ್ಗೆ ಸೂಚನೆ ಕೊಡುವ ಫಲಕಗಳಿಲ್ಲ. ಮುನ್ಸೂಚನೆ ಇಲ್ಲದೆ ವೇಗವಾಗಿ ಬರುವ ವಾಹನಗಳು ಅವುಗಳ ಬಳಿ ಅಪಾಯಕರವಾದ ರೀತಿಯಲ್ಲಿ ಬ್ರೇಕ್ ಹಾಕಿ ಥಟ್ಟನೆ ಭಯವಾಗುವಂತಹ ಶಬ್ದ (ಚಕ್ರಗಳಿಂದ) ಹೊರಡಿಸುತ್ತವೆ ಇಲ್ಲವೆ ಡುಬ್ಬ ದಾಟುತ್ತಾ ಮುಗ್ಗರಿಸುತ್ತವೆ. ಆದ್ದರಿಂದ ಸಂಬಂಧಪಟ್ಟವರು ಸೂಕ್ತ ಬೋರ್ಡುಗಳನ್ನು ಹಾಕಿಸಬೇಕೆಂದು ಇಲ್ಲಿನ ನಿವಾಸಿಗಳ ಕೋರಿಕೆ.

## ಕೊಪ್ಪ ರೈತ ಸಮ್ಮೇಳನ: ಭಾಷಣಗಳ ಸಾರಾಂಶ

(ಸಂಗ್ರಹ: ಚಾವಲ್ಮನೆ ಸುರೇಶ ನಾಯಕ್)

ಕೊಪ್ಪ: ಇಲ್ಲಿ ಏ. ೧೬ರಂದು ನಡೆದ ತಾಲೋಕು ರೈತ ಸಮ್ಮೇಳನದಲ್ಲಿ ಭಾಗವಹಿಸಿದ್ದ ಕರ್ನಾಟಕ ರಾಜ್ಯ ರೈತಸಂಘದ ಪದಾಧಿಕಾರಿಗಳಾದ ಹೆಚ್. ಎಸ್. ರುದ್ರಪ್ಪ, ಎನ್. ಡಿ. ಸುಂದ್ರೇಶ್ ಮತ್ತು ಪ್ರೊ॥ನಂಜುಂಡಸ್ವಾಮಿ ಅವರುಗಳ ಭಾಷಣದ ಮುಖ್ಯಾಂಶ ಇಲ್ಲಿದೆ:

**ಎನ್. ಡಿ. ಸುಂದ್ರೇಶ್ :**

ದೇಶದ ಜನರಿಗೆ ಊಟ ಹಾಕುವುದಕ್ಕಾಗಿ ಸರ್ಕಾರವು ರೈತರಿಗೆ ಸಾಲ ಕೊಟ್ಟಿತು. ರೈತರು ಅದಕ್ಕೆ ಪ್ರತಿಫಲವಾಗಿ ದೇಶಕ್ಕೆ ಅನ್ನ ಹಾಕಿದ್ದಾರೆ. ಆದುದರಿಂದ ರೈತರು ಸಾಲಗಾರರಲ್ಲ. ಇಲ್ಲಿಯವರೆಗೆ ಸರ್ಕಾರವು ರೈತರಿಗೆ ಆಹಾರಧಾನ್ಯಗಳಿಗೆ ಸರಿಯಾಗಿ ಬೆಲೆ ಕೊಡದೇ ರೈತರನ್ನು ದರೋಡೆ ಮಾಡಿದೆ. ಕೈಗಾರಿಕಾ ವಸ್ತುಗಳಿಗೆ ಬೆಲೆಯನ್ನು ಮಾಲೀಕರೇ ನಿಗದಿ ಮಾಡುತ್ತಾರೆ. ಆದರೆ ತಾನು ಬೆಳೆಯುವಂಥದಕ್ಕೆ ಬೆಲೆ ನಿಗದಿಮಾಡುವ ಸ್ವಾತಂತ್ರ್ಯ ರೈತನಿಗೆ ಇಲ್ಲ. ರೈತರ ಕೃಷಿ ಉತ್ಪನ್ನಗಳಿಗೆ ಬೆಲೆ ನಿಗದಿ ಮಾಡುವವರು ಮೂರ್ಖ ಐ.ಎ.ಎಸ್. ಅಧಿಕಾರಿಗಳು. ಇದರಿಂದಾಗಿ ದೇಶದ ಲಕ್ಷಾಂತರ ಹಳ್ಳಿಗಳು ಸ್ಮಶಾನಗಳಾಗಿವೆ. ರೈತರು ಈಗ ಸರ್ಕಾರಕ್ಕೆ ಮಂಡಿಸಿರುವುದು ಬೇಡಿಕೆಗಳಲ್ಲ, ಒತ್ತಾಯಗಳು.

**ಪ್ರೊ॥ ಎಂ.ಡಿ. ನಂಜುಂಡಸ್ವಾಮಿ:**

ರೈತಸಂಘದ ರಾಜಕಾರಣವು ಹಡಬಿಟ್ಟಿ ರಾಜಕಾರಣ ಅಲ್ಲ. ಈಗ ನಡೆಯುತ್ತಿರುವ ಹಡಬಿಟ್ಟಿ ರಾಜಕಾರಣವನ್ನು ಕೊನೆಗೊಳಿಸಿ ಮೊದಲನೇ ದರ್ಜೆಯ ರಾಜಕಾರಣ ಪ್ರಾರಂಭಿಸುವುದರಲ್ಲಿ ಯುವಕರು ಹೆಚ್ಚಿಗೆ ಶ್ರಮಿಸಬೇಕು. ಬಹಳ ಹಿಂದೆ ಜನ ಯಾರನ್ನು ಬೇಡ ಎಂದು ಬಿಸಾಕಿದ್ದರೋ ಅಂಥವರು ಈಗ ಮತ್ತೆ ಅಧಿಕಾರಕ್ಕೆ ಬಂದಿದ್ದಾರೆ. ನೂತನ ಸರ್ಕಾರವು ಹಾವಿನ ಹಾಗೆ ತಲೆಯನ್ನು ಮಾತ್ರ ತಿರುಗಿಸಿದೆ ಅಷ್ಟೆ. ಮೈಯೆಲ್ಲಾ ಹಳೇ ಸರ್ಕಾರದ ಹಾಗೇ.

ಹೊಸ ಸರ್ಕಾರ ಮಂಡಿಸಿದ ಬಜೆಟ್‌ನಲ್ಲಿ ಹಳ್ಳಿಗರನ್ನು ತೀರಾ ಕಡೆಗಣಿಸಲಾಗಿವೆ; ನಗರಕ್ಕೇ ಹೆಚ್ಚಿನ ಪ್ರಾತಿನಿಧ್ಯ ಸಿಕ್ಕಂತಾಗಿದೆ. ಉದಾಹರಣೆಗೆ ಕೇವಲ ಒಂದು ಲಕ್ಷದಷ್ಟಿರುವ ಸರ್ಕಾರೀ ಅಧಿಕಾರಿಗಳಿಗೆ ನಮ್ಮ ಸರ್ಕಾರವು ೮೦ ಕೋಟಿ ರೂ. ವಿಶ್ರಾಂತಿ ವೇತನ ಕೊಡುತ್ತಿದೆ. ಆದರೆ ೩ಲಕ್ಷದಷ್ಟಿರುವ ವೃದ್ಧ ರೈತರಿಗೆ ಕೇವಲ ಒಂದೂವರೆ ಕೋಟಿ ರೂ. ವಿಶ್ರಾಂತಿವೇತನ ನೀಡುತ್ತಿದೆ. ೩ಲಕ್ಷ ಸರ್ಕಾರೀ ನೌಕರರಿಗೆ ಸುಮಾರು ನಲವತ್ತು ಕೋಟಿ ರೂ. ಸಂಬಳ ಹೆಚ್ಚಿಸಲಾಗಿದೆ. ಅವರಿಗೆ ಹಬ್ಬದ ಅಡ್ವಾನ್ಸ್ ಮುಂತಾದ ಸೌಲಭ್ಯ ಕೊಡಲಾಗುತ್ತಿದೆ. ಆದರೆ ರೈತನಿಗೆ ಇನಾವುದೂ ಇಲ್ಲ. ಗ್ರಾಮಸ್ವರಾಜ್ಯದ ಸ್ಥಾಪನೆಗೆ ಗಂಡೆದೆಬೇಕು. ಆ ಗಂಡೆದೆ ಇಂದಿನ ಸರ್ಕಾರಕ್ಕೆ ಇಲ್ಲ.

ರೈತನಿಗೆ ಬೇಕಾಗುವ ದಿನಬಳಕೆ ವಸ್ತುಗಳನ್ನು ಪಟ್ಟಿಮಾಡಿ ಅವುಗಳನ್ನು ರೈತರು ಹಳ್ಳಿಗಳಲ್ಲೇ ತಯಾರುಮಾಡಬೇಕು. ವಿಚಾರ ಮತ್ತು ಆಚಾರಗಳ ನಡುವೆ ಬೆಳೆದಿರುವ ಕಂದಕವನ್ನು ಹೋಗಲಾಡಿಸಬೇಕು. ರೈತರು ತಮ್ಮ ಹೋರಾಟದಲ್ಲಿ ಗಂಭೀರವಾಗಿ ವರ್ತಿಸಬೇಕು. ರೈತರು ಈ ದೇಶದ ಮಾಲೀಕರು. ಆದ್ದರಿಂದ ರೈತಸಂಘವು ಈ ದೇಶದ 'ಮಾಲೀಕರ ಸಂಘ' ಈಗ ಇರುವ ರಾಜಕೀಯ ಪಕ್ಷಗಳು 'ತಾಯಿಗಂಡರ ಕೂಟಗಳು'.

**ಹೆಚ್.ಎಸ್. ರುದ್ರಪ್ಪ**

ರೈತಹೋರಾಟವು ದೇಶದಲ್ಲಿ ನಡೆಯುತ್ತಿರುವ ಅನ್ಯಾಯದ ವಿರುದ್ಧದ ಹೋರಾಟ. ನಮ್ಮ ದೇಶವನ್ನು ಭ್ರಷ್ಟ ರಾಜಕಾರಣಿಗಳು, ಐ.ಎ.ಎಸ್. ಅಧಿಕಾರಿಗಳು ಆಳುತ್ತಿದ್ದಾರೆ. ರೈತನ ಶ್ರಮದ ಫಲ ಎಲ್ಲಾ ಪಟ್ಟಣಕ್ಕೆ ಹೋಗ್ತಾ ಇದೆ. ಅವನಿಗೆ ಅದಕ್ಕೆ ತಕ್ಕ ಪ್ರತಿಫಲ ಏನೂ ಸಿಗ್ತಾ ಇಲ್ಲ. ಸ್ವಾತಂತ್ರ್ಯನಂತರದ ಈ ೩೫ ವರ್ಷಗಳಲ್ಲಿ "ಸ್ವಾತಂತ್ರ್ಯ ಬರದೇ ಇದ್ರೇನೇ ನಾವು ಇನ್ನೂ ಚೆನ್ನಾಗಿ ಇರುತ್ತಿದ್ದೆವೇನೋ" ಅನ್ನಿಸುವಂತಾಗಿದೆ. ಈ ಅನ್ಯಾಯ ಕೊನೆಗೊಳಿಸಲು ರೈತರು ಅಹಿಂಸೆಯಿಂದ ಹೋರಾಡುವುದನ್ನು ಕಲಿಯಬೇಕು.

**ಮಳಿಗೆ ಚಂದ್ರಶೇಖರ್:**

ನಾವು ರೈತಸಂಘದ ಪದಾಧಿಕಾರಿಗಳು ಯಾವ ರಾಜಕೀಯ ಪಕ್ಷದಲ್ಲೂ ಇಲ್ಲ. ರಾಜಕೀಯ ಪಕ್ಷದ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದ್ದೇವೆ.

ಕೊನೆಯಲ್ಲಿ ರೈತಘೋಷಣೆಯೊಂದಿಗೆ ಸಭೆ ಮುಕ್ತಾಯವಾಯಿತು.

## ಉತ್ಸವಗಳು

**ಬಸರಿಕಟ್ಟೆ**

ಏ. ೨೨ರಿಂದ ೨೪ರವರೆಗೆ ಇಲ್ಲಿನ ಆರ್ಯ ಸಂಸ್ಕೃತಿ ಸೇವಾ ಸಂಘದ ಆಶ್ರಯದಲ್ಲಿ ರಾಮೋತ್ಸವ ಆಚರಿಸಲಾಯಿತು. ಸಂಗೀತ ಮತ್ತು ಹರಿಕಥೆ ಗೋಷ್ಠಿಗಳು ನಡೆದವು.

**ಬ್ರಾಹ್ಮಣ ಮಹಾಸಭೆ**

ಕೊಪ್ಪದ ಬ್ರಾಹ್ಮಣ ಮಹಾಸಭೆಯ ಆಶ್ರಯದಲ್ಲಿ ಏ. ೧೮ರಂದು ರಾಮಾನುಜಾಚಾರ್ಯರ ಜಯಂತಿ ಆಚರಿಸಲ್ಪಟ್ಟಿತು. ರಾಮಾನುಜಾಚಾರ್ಯರ ಜೀವನ, ವಿಶಿಷ್ಟಾದ್ವೈತ ತತ್ವಪ್ರಚಾರಗಳ ಬಗ್ಗೆ ಜಿ.ಎಸ್. ವೆಂಕಟೇಶಮೂರ್ತಿ, ಡಾ॥ಎಂ.ಆರ್.ಆರ್ ಐಯ್ಯಂಗಾರ್ ಭಾಷಣ ಮಾಡಿದರು. ಬಿ. ವೆಂಕಟೇಶ ಭಟ್ ಅಧ್ಯಕ್ಷತೆವಹಿಸಿದ್ದರು.

## ಆಟೋ ಡಿಕ್ಕಿ: ವೃದ್ಧನ ಮರಣ

ಕೊಪ್ಪ: ಪುರಾಣದ ಸೂರ್ಯದೇವಸ್ಥಾನದ ಬಳಿ ಏ. ೨೪ರ ರಾತ್ರಿ ೮ ಗಂಟೆ ಹೊತ್ತಿಗೆ ಎಂವೈಸಿ ೮೩೧೨ ನಂಬರಿನ ಆಟೋರಿಕ್ಷಾ ಡಿಕ್ಕಿ ಹೊಡೆದು ಸೂರ್ಯಕೊಪ್ಪದ ವ್ಯಾಸನಾರಾಯಣ ಶೆಟ್ಟಿ (೬೫) ಎಂಬವರು ಸ್ಥಳದಲ್ಲೇ ತೀರಿಕೊಂಡರೆಂದು ತಿಳಿದುಬಂದಿದೆ.

ಆಟೋ ಚಾಲಕ ಕೊಪ್ಪದ ಸುರೇಶ ಎಂಬವನನ್ನು ಬಂಧಿಸಿ ಜಾಮೀನಿನಮೇಲೆ ಬಿಡಲಾಗಿದ್ದು, ಕೊಪ್ಪದ ಸಬ್ ಇನ್‌ಸ್ಪೆಕ್ಟರ್ ಶಿರಗುಪ್ಪಿ ಪ್ರಕರಣದ ತನಿಖೆ ನಡೆಸುತ್ತಿದ್ದಾರೆ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀನಬಂಧು ಅಚ್ಚುಕೂಟ, ಕೊಪ್ಪ.